# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 179 |
| ಮಾನ್ಯ ಸದಸ್ಯರ ಹೆಸರು | ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ಸಚಿವರು | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 07-12-2020 |

| ಪ್ರಶ್ನೆ | | ಉತ್ತರ |
|---|---|---|
| (ಅ) | ರಾಜ್ಯದ ಉನ್ನತ ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಸಾಂಪ್ರದಾಯಿಕ ಹಾಗೂ ಇತರೆ ವಿಶ್ವವಿದ್ಯಾನಿಲಯಗಳು ಎಷ್ಟು; ಅವು ಯಾವುವು; ಅವುಗಳನ್ನು ಯಾವಾಗ ಸ್ಥಾಪನೆ ಮಾಡಲಾಯಿತು; ಅವುಗಳಲ್ಲಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಕುಲಪತಿಗಳ, ಕುಲಸಚಿವರುಗಳ ವಿವರ ಒದಗಿಸುವುದು; (ವಿಶ್ವವಿದ್ಯಾಲಯವಾರು ವಿವರವಾದ ಮಾಹಿತಿ ಒದಗಿಸುವುದು) | ರಾಜ್ಯದ ಉನ್ನತ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ 23 ಸಾಂಪ್ರದಾಯಿಕ ವಿಶ್ವವಿದ್ಯಾಲಯಗಳು, 19 ಖಾಸಗಿ ವಿಶ್ವವಿದ್ಯಾಲಯಗಳು ಹಾಗೂ 16 ಡೀಮ್ಡ್ ವಿಶ್ವವಿದ್ಯಾಲಯಗಳು ಕಾರ್ಯನಿರ್ವಹಿಸುತ್ತಿವೆ. ಸಾಂಪ್ರದಾಯಿಕ ಹಾಗೂ ಖಾಸಗಿ ವಿಶ್ವವಿದ್ಯಾನಿಲಯಗಳು ಸ್ಥಾಪನೆಯಾದ ವರ್ಷ ಹಾಗೂ ಸಾಂಪ್ರದಾಯಿಕ ವಿಶ್ವವಿದ್ಯಾನಿಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕುಲಪತಿ/ಕುಲಸಚಿವರುಗಳ ವಿವರಗಳನ್ನು **ಅನುಬಂಧದಲ್ಲಿ** ಲಗತ್ತಿಸಿದೆ. |
| (ಆ) | ಯಾವ ಯಾವ ವಿಶ್ವವಿದ್ಯಾಲಯಗಳಲ್ಲಿ ಯಾವ ಯಾವ ವರ್ಷಗಳಿಂದ ದೂರ ಶಿಕ್ಷಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ; (ವಿಶ್ವವಿದ್ಯಾಲಯವಾರು ಮಾಹಿತಿ ನೀಡುವುದು) | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ;1996, ಕರ್ನಾಟಕ ವಿಶ್ವವಿದ್ಯಾಲಯ; 1961-62, ಮೈಸೂರು ವಿಶ್ವವಿದ್ಯಾಲಯ;1964, ಕುವೆಂಪು ವಿಶ್ವವಿದ್ಯಾಲಯ;2002-03, ಬೆಂಗಳೂರು ವಿಶ್ವವಿದ್ಯಾಲಯ;1976, ಮಂಗಳೂರು ವಿಶ್ವವಿದ್ಯಾಲಯ;2004 ಹಾಗೂ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಲಯದಲ್ಲಿ 2014-15ನೇ ಸಾಲಿನಿಂದ ದೂರ ಶಿಕ್ಷಣದ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿತ್ತು. |
| (ಇ) | ಇತ್ತೀಚೆಗೆ ಸರ್ಕಾರವು ದೂರಶಿಕ್ಷಣ ಕಾರ್ಯಕ್ರಮವನ್ನು ಮೈಸೂರಿನ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದಲ್ಲಿ ಮಾತ್ರ ಮುಂದುವರೆಸುವಂತೆ ಆದೇಶ ಮಾಡಿ, ಇತರೆ ವಿಶ್ವವಿದ್ಯಾಲಯಗಳಲ್ಲಿ ಈ ಕಾರ್ಯಕ್ರಮಗಳನ್ನು ರದ್ದುಗೊಳಿಸಿರುವುದು ನಿಜವೇ; | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವನ್ನು ವಿಶೇಷವಾಗಿ ದೂರ ಶಿಕ್ಷಣ ನೀಡುವ ಉದ್ದೇಶಕ್ಕಾಗಿಯೇ ರಾಜ್ಯಾದ್ಯಂತ ಭೌಗೋಳಿಕ ಅಧಿಕಾರ ವ್ಯಾಪ್ತಿ ಹೊಂದಿರುವಂತೆ ಸ್ಥಾಪಿಸಲಾಗಿರುವುದರಿಂದ ಮತ್ತು ಇತರ ವಿಶ್ವವಿದ್ಯಾನಿಲಯಗಳು ಸಾಂಪ್ರದಾಯಿಕ ಶೈಕ್ಷಣಿಕ ಕಾರ್ಯಕ್ರಮಗಳ ಕಡೆಗೆ ಹೆಚ್ಚಿನ ಗಮನ ಕೇಂದ್ರೀಕರಿಸಿಕೊಳ್ಳುವಂತೆ ಮಾಡುವ ಸದುದ್ದೇಶದಿಂದ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವನ್ನು ಹೊರತುಪಡಿಸಿ ಇತರೆ ಸಾಂಪ್ರದಾಯಿಕ ವಿಶ್ವವಿದ್ಯಾನಿಲಯಗಳು ದೂರ ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸದಂತೆ ನಿಯಂತ್ರಿಸಲು ಅಧ್ಯಾದೇಶ ಹೊರಡಿಸಿದೆ. |
| (ಈ) | ಹಾಗಿದ್ದಲ್ಲಿ, ರಾಜ್ಯದಲ್ಲಿ ಉನ್ನತ ಶಿಕ್ಷಣ ಪಡೆಯಬೇಕೆಂಬ ಹಂಬಲವಿರುವ ದೂರಶಿಕ್ಷಣ ವಿದ್ಯಾರ್ಥಿಗಳ ಭವಿಷ್ಯವೇನು; | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯವು ರಾಜ್ಯಾದ್ಯಂತ ದೂರ ಶಿಕ್ಷಣ ನೀಡಲು ಅಧಿಕಾರ ವ್ಯಾಪ್ತಿಹೊಂದಿರುತ್ತದೆ. ಉನ್ನತ ಶಿಕ್ಷಣ ಪಡೆಯಬೇಕೆಂಬ ಹಂಬಲವಿರುವ ವಿದ್ಯಾರ್ಥಿಗಳಿಗೆ ಕರ್ನಾಟಕ ರಾಜ್ಯ ಮುಕ್ತವಿಶ್ವವಿದ್ಯಾನಿಲಯವು ಆನ್ ಲೈನ್‌ನಲ್ಲಿ ಅಥವಾ ಪ್ರಾದೇಶಿಕ ಕೇಂದ್ರಗಳ ಮೂಲಕ ಪ್ರವೇಶಾತಿ ನೀಡುತ್ತಿದ್ದು, ಇದರಿಂದ ವಿದ್ಯಾರ್ಥಿಗಳಿಗೆ ಸಂಬಂಧಿಸಿದ ಕೋರ್ಸುಗಳಿಗೆ ಯಾವುದೇ ಸ್ಟಡಿ ಸೆಂಟರ್‌ಗಳ ಸಹಾಯವಿಲ್ಲದೇ ಪ್ರವೇಶ ಪಡೆಯಲು ಅನುಕೂಲವಾಗಿದೆ. ಸರ್ಕಾರದ ಈ ಕ್ರಮದಿಂದ ವಿದ್ಯಾರ್ಥಿಗಳ ಭವಿಷ್ಯಕ್ಕೆ ಯಾವುದೇ ತೊಂದರೆಯಾಗುವುದಿಲ್ಲ. |
| (ಉ) | ಸರ್ಕಾರವು ಯಾವ ಕಾಲಮಿತಿಯೊಳಗೆ ಈ ಆದೇಶವನ್ನು ರದ್ದುಗೊಳಿಸಿ, ಮೊದಲಿನಂತೆಯೇ ಮುಂದುವರೆಸಲು ಕ್ರಮ ಕೈಗೊಳ್ಳುವುದು? | ಅಧ್ಯಾದೇಶದ ಮೂಲಕ ದೂರ ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸಲು ಉದ್ದೇಶಿಸಿರುವುದರಿಂದ ಇದನ್ನು ರದ್ದುಗೊಳಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ: ಇಡಿ 361 ಯುಎನ್ಇ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಐಟಿ & ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)

# ಅನುಬಂಧ

## ಸಾಂಪ್ರದಾಯಿಕ ವಿಶ್ವವಿದ್ಯಾನಿಲಯಗಳ ವಿವರ

| ಕ್ರ.ಸಂ. | ವಿಶ್ವವಿದ್ಯಾನಿಲಯದ ಹೆಸರು | ಸ್ಥಾಪನೆಯಾದ ವರ್ಷ | ಹಾಲಿ ಕರ್ತವ್ಯನಿರ್ವಹಿಸುತ್ತಿರುವ ಕುಲಪತಿಗಳ ವಿವರ | ಹಾಲಿ ಕರ್ತವ್ಯನಿರ್ವಹಿಸುತ್ತಿರುವ ಕುಲಸಚಿವ (ಆಡಳಿತ) | ಹಾಲಿ ಕರ್ತವ್ಯನಿರ್ವಹಿಸುತ್ತಿರುವ ಕುಲಸಚಿವ (ಮೌಲ್ಯಮಾಪನ) |
|---|---|---|---|---|---|
| 1 | ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು | 1964 | ಡಾ: ಕೆ.ಆರ್. ವೇಣುಗೋಪಾಲ್ | ಶ್ರೀಮತಿ ಜ್ಯೋತಿ ಐ.ಎ.ಎಸ್. | ಪ್ರೊ. ದೇವರಾಜ |
| 2 | ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ, ಬೆಂಗಳೂರು | 2010 | ಪ್ರೊ. ಕೆ.ಇ. ದೇವನಾಥನ್ | ಪ್ರೊ. ಆರ್. ಕೊಟ್ರೇಶ್ | – |
| 3 | ರಾಣಿ ಚೆನ್ನಮ್ಮ, ಬೆಳಗಾವಿ | 2010 | ಪ್ರೊ. ರಾಮಚಂದ್ರೇಗೌಡ | ಪ್ರೊ. ಬಸವರಾಜ ಪದ್ಮಸಾಲಿ | ಪ್ರೊ. ಎಸ್.ಎಂ. ಹುರಕಡ್ಲಿ |
| 4 | ವಿಜಯನಗರ ಶ್ರೀಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ | 2010 | ಪ್ರೊ. ಸಿದ್ದು ಪಿ. ಅಲಗೂರು | ಪ್ರೊ. ಬಿ.ಕೆ. ತುಳಸೀಮಾಲ | ಪ್ರೊ. ಶಶಿಕಾಂತ್ ಎಸ್. ಹುಡಕೇರಿ |
| 5 | ತುಮಕೂರು ವಿಶ್ವವಿದ್ಯಾಲಯ, ತುಮಕೂರು | 2004 | ಪ್ರೊ. ವೈ.ಎಸ್. ಸಿದ್ದೇಗೌಡ | ಶ್ರೀ ನರಸಿಂಹಪ್ಪ ಕೆ.ಎ.ಎಸ್ | ಪ್ರೊ. ಕೆ.ಜಿ. ಸುರೇಶ್ |
| 6 | ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ | 1987 | ಡಾ: ಬಿ.ಪಿ. ವೀರಭದ್ರಪ್ಪ | ಪ್ರೊ. ಎಸ್.ಎಸ್. ಪಾಟೀಲ್ | ಪ್ರೊ. ಕಣ್ಣನ್ |
| 7 | ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಬೆಳಗಾವಿ | 1994 | ಡಾ: ಕರಿಸಿದ್ದಪ್ಪ | ಪ್ರೊ. ಎ.ಎಸ್. ದೇಶಪಾಂಡೆ | ಡಾ: ಸತೀಶ್ ಅಣ್ಣಿಗೇರಿ |
| 8 | ಮೈಸೂರು ವಿಶ್ವವಿದ್ಯಾಲಯ, ಮೈಸೂರು | 1916 | ಡಾ: ಹೇಮಂತ್‌ಕುಮಾರ್ | ಪ್ರೊ. ಆರ್. ಶಿವಪ್ಪ | ಡಾ: ಕೆ.ಎಂ. ಮಹದೇವನ್ |
| 9 | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ | 1949 | ಪ್ರೊ. ಕೆ.ಬಿ. ಗುಡಸಿ | ಶ್ರೀ ಹನುಮಂತಪ್ಪ ಐ.ಎಫ್.ಎಸ್ | ಪ್ರೊ. ರವೀಂದ್ರ ನಾಥ ಕದಮ್ |
| 10 | ಗುಲ್ಬರ್ಗ ವಿಶ್ವವಿದ್ಯಾಲಯ, ಕಲಬುರಗಿ | 1980 | ಪ್ರೊ. ಚಂದ್ರಕಾಂತ ಎಂ. ಯಾತನೂರು (ಪ್ರ) | ಪ್ರೊ. ಸಿ. ಸೋಮಶೇಖರ್ | ಪ್ರೊ. ಸಂಜೀವ್‌ಕುಮಾರ್ ಕೆ.ಎಂ., |
| 11 | ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು | 1980 | ಡಾ: ಪಿ. ಸುಬ್ರಮಣ್ಯ ಎಡಪಡತಾಯ | ಶ್ರೀ ರಾಜು ಮೊಗವೀರ ಕೆ.ಎ.ಎಸ್ | ಪ್ರೊ. ಪಿ.ಎಲ್. ಧರ್ಮ |
| 12 | ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ | 2003 | ಪ್ರೊ. ಓಂಕಾರ್‌ಗೌಡ ಕಾಕಡೆ (ಪ್ರ) | ಪ್ರೊ. ಆರ್. ಸುನಂದಮ್ಮ | ಪ್ರೊ. ಪಿ.ಎಫ್. ತಡಸದ್ |
| 13 | ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ, ದಾವಣಗೆರೆ | 2009 | ಪ್ರೊ. ಎಸ್.ವಿ. ಹಲಸೆ | ಪ್ರೊ. ಬಸವರಾಜ ಬಣಕಾರ್ | ಪ್ರೊ. ಅನಿತಾ |
| 14 | ಬೆಂಗಳೂರು ನಗರ ವಿಶ್ವವಿದ್ಯಾಲಯ, ಬೆಂಗಳೂರು | 2015 | ಡಾ: ಎನ್. ನರಸಿಂಹಮೂರ್ತಿ (ಪ್ರ) | ಶ್ರೀಮತಿ ಆರತಿ ಆನಂದ್ ಕೆ.ಎ.ಎಸ್. | ಡಾ: ರಮೇಶ್ |
| 15 | ಬೆಂಗಳೂರು ಉತ್ತರ ವಿಶ್ವವಿದ್ಯಾಲಯ, ಕೋಲಾರ | 2015 | ಪ್ರೊ. ಟಿ.ಡಿ. ಕೆಂಪರಾಜು | ಶ್ರೀ ವೆಂಕಟೇಶ್‌ಮೂರ್ತಿ | ಪ್ರೊ. ಜನಾರ್ಧನ್ |
| 16 | ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು | 1996 | ಪ್ರೊ. ವಿದ್ಯಾಶಂಕರ್ ಎಸ್. | ಪ್ರೊ. ಲಿಂಗರಾಜಗಾಂಧಿ | ಶ್ರೀಮತಿ ಕವಿತಾ ರೈ |
| 17 | ಕರ್ನಾಟಕ ರಾಜ್ಯ ಜಾನಪದ ವಿಶ್ವವಿದ್ಯಾಲಯ, ಗೊಟಗೋಡಿ, ಹಾವೇರಿ ಜಿಲ್ಲೆ | 2012 | ಪ್ರೊ. ಡಿ.ಬಿ. ನಾಯಕ್ | ಪ್ರೊ. ನಾರಾಯಣ ಎಸ್. ಸಾಲಿ (ಪ್ರ) | ಪ್ರೊ. ನಾರಾಯಣ ಎಸ್. ಸಾಲಿ |
| 18 | ಕರ್ನಾಟಕ ರಾಜ್ಯ ಡಾ: ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯ, ಮೈಸೂರು | 2009 | ಪ್ರೊ. ನಾಗೇಶ್ ವಿ. ಬೆಟ್ಟಕೋಟೆ (ಪ್ರ) | ಪ್ರೊ. ನಾಗೇಶ್ ವಿ. ಬೆಟ್ಟಕೋಟೆ | – |
| 19 | ಕನ್ನಡ ವಿಶ್ವವಿದ್ಯಾಲಯ, ಹಂಪಿ | 1991 | ಪ್ರೊ. ಸ.ಚಿ. ರಮೇಶ್ | ಡಾ: ಸುಬ್ಬಣ್ಣ ರೈ | – |
| 20 | ರಾಯಚೂರು ವಿಶ್ವವಿದ್ಯಾನಿಲಯ, ರಾಯಚೂರು | 2020 | ಪ್ರೊ. ಹರೀಶ್ ರಾಮಸ್ವಾಮಿ | – | – |
| 21 | ನೃಪತುಂಗ ವಿಶ್ವವಿದ್ಯಾಲಯ, ಬೆಂಗಳೂರು. | 2020 | ಡಾ: ಶ್ರೀನಿವಾಸ್ ಎಸ್. ಬಳ್ಳಿ | – | – |
| 22 | ಮಹಾರಾಣಿ ಕ್ಲಷ್ಟರ್ ವಿಶ್ವವಿದ್ಯಾಲಯ, ಬೆಂಗಳೂರು | 2020 | ಡಾ: ಗೋಮತಿದೇವಿ | – | – |
| 23 | ಮಂಡ್ಯ ವಿಶ್ವವಿದ್ಯಾಲಯ, ಮಂಡ್ಯ. | 2020 | ಡಾ: ಪುಟ್ಟರಾಜು | – | – |

## ಖಾಸಗಿ ವಿಶ್ವವಿದ್ಯಾನಿಲಯಗಳ ವಿವರ

| ಕ್ರಸಂ. | ವಿಶ್ವವಿದ್ಯಾನಿಲಯದ ಹೆಸರು | ಸ್ಥಾಪನೆಯಾದ ವರ್ಷ |
|---|---|---|
| 1 | ಅಲೆಯನ್ಸ್ ವಿಶ್ವವಿದ್ಯಾಲಯ, ಬೆಂಗಳೂರು | 2010 |
| 2 | ಅಜೀಮ್ ಪ್ರೇಮ್‌ಜಿ ವಿಶ್ವವಿದ್ಯಾಲಯ, ಬೆಂಗಳೂರು | 2010 |
| 3 | ಪ್ರೆಸಿಡೆನ್ಸಿ ವಿಶ್ವವಿದ್ಯಾಲಯ, ಬೆಂಗಳೂರು | 2014 |
| 4 | ಸಿ.ಎಂ.ಆರ್. ವಿಶ್ವವಿದ್ಯಾಲಯ, ಬೆಂಗಳೂರು | 2013 |
| 5 | ಪಿ.ಇ.ಎಸ್. ವಿಶ್ವವಿದ್ಯಾಲಯ, ಬೆಂಗಳೂರು | 2013 |
| 6 | ಎಂ.ಎಸ್. ರಾಮಯ್ಯ ಯೂನಿವರ್ಸಿಟಿ ಆಫ್ ಅಪ್ಲೈಡ್ ಸೈನ್ಸಸ್, ಬೆಂಗಳೂರು | 2013 |
| 7 | ರೇವಾ ವಿಶ್ವವಿದ್ಯಾಲಯ, ಬೆಂಗಳೂರು | 2013 |
| 8 | ದಯಾನಂದ ಸಾಗರ ವಿಶ್ವವಿದ್ಯಾಲಯ, ಬೆಂಗಳೂರು | 2014 |
| 9 | ರೈ ತಾಂತ್ರಿಕ ವಿಶ್ವವಿದ್ಯಾಲಯ, ಬೆಂಗಳೂರು | 2014 |
| 10 | ಕೆ.ಎಲ್.ಇ. ವಿಶ್ವವಿದ್ಯಾಲಯ, ಹುಬ್ಬಳ್ಳಿ | 2015 |
| 11 | ಜೆ.ಎಸ್.ಎಸ್. ತಾಂತ್ರಿಕ ವಿಶ್ವವಿದ್ಯಾಲಯ, ಮೈಸೂರು | 2016 |
| 12 | ಗಾರ್ಡನ್ ಸಿಟಿ ವಿಶ್ವವಿದ್ಯಾಲಯ, ಬೆಂಗಳೂರು | 2016 |
| 13 | ಶ್ರೀನಿವಾಸ ವಿಶ್ವವಿದ್ಯಾಲಯ, ಮಂಗಳೂರು | 2017 |
| 14 | ಶರಣ ಬಸವ ವಿಶ್ವವಿದ್ಯಾಲಯ, ಕಲಬುರಗಿ | 2017 |
| 15 | ಆದಿಚುಂಚನಗಿರಿ ವಿಶ್ವವಿದ್ಯಾಲಯ, ನಾಗಮಂಗಲ | 2018 |
| 16 | ಖಾಜ ಬಂದಾನಾಜ್ ವಿಶ್ವವಿದ್ಯಾಲಯ, ಕಲಬುರಗಿ | 2018 |
| 17 | ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ವಿಶ್ವವಿದ್ಯಾಲಯ, ಧಾರವಾಡ. | 2018 |
| 18 | ಶ್ರೀ ಸತ್ಯ ಸಾಯಿ ಮಾನವ ಅಭ್ಯುದಯ ವಿಶ್ವವಿದ್ಯಾಲಯ, ಕಲಬುರಗಿ. | 2019 |
| 19 | ಎನ್.ಐ.ಇ. ವಿಶ್ವವಿದ್ಯಾಲಯ, ಮೈಸೂರು. | 2019 |

## ಡೀಮ್ಡ್ ವಿಶ್ವವಿದ್ಯಾನಿಲಯಗಳ ವಿವರ

| ಕ್ರಸಂ. | ವಿಶ್ವವಿದ್ಯಾನಿಲಯದ ಹೆಸರು |
|---|---|
| 1 | ಜೈನ್ ವಿಶ್ವವಿದ್ಯಾಲಯ, ಬೆಂಗಳೂರು |
| 2 | ಕ್ರೈಸ್ಟ್ ವಿಶ್ವವಿದ್ಯಾಲಯ, ಬೆಂಗಳೂರು |
| 3 | ಯೆನೆಪೋಯ ವಿಶ್ವವಿದ್ಯಾಲಯ, ದೇರಳಕಟ್ಟೆ, ಮಂಗಳೂರು |
| 4 | ಸ್ವಾಮಿ ವಿವೇಕಾನಂದ ಯೋಗ ಅನುಸಂಧಾನ ಸಂಸ್ಥಾನ, ಗಿಡ್ಡೇನಹಳ್ಳಿ, ಬೆಂಗಳೂರು |
| 5 | ಶ್ರೀ ಸಿದ್ದಾರ್ಥ ಅಕಾಡೆಮಿ ಆಫ್ ಹೈಯರ್ ಎಜುಕೇಷನ್, ಆಗಲಕೋಟೆ, ತುಮಕೂರು |
| 6 | ಶ್ರೀ ದೇವರಾಜ ಅರಸ್ ಅಕಾಡೆಮಿ ಆಫ್ ಹೈಯರ್ ಎಜುಕೇಷನ್ ಅಂಡ್ ರೀಸರ್ಚ್, ಕೋಲಾರ |
| 7 | ನಿಟ್ಟೆ ವಿಶ್ವವಿದ್ಯಾಲಯ, ಮಂಗಳೂರು. |
| 8 | ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಮೆಂಟಲ್ ಹೆಲ್ತ್ ಅಂಡ್ ನ್ಯೂರೋ ಸೈನ್ಸಸ್, ಬೆಂಗಳೂರು. |
| 9 | ಮಣಿಪಾಲ ಅಕಾಡೆಮಿ ಆಫ್ ಹೈಯರ್ ಎಜುಕೇಷನ್, ಮಣಿಪಾಲ |
| 10 | ಕೆ.ಎಲ್.ಇ. ಅಕಾಡೆಮಿ ಆಫ್ ಹೈಯರ್ ಎಜುಕೇಷನ್ ಅಂಡ್ ರೀಸರ್ಚ್, ಬೆಳಗಾವಿ. |
| 11 | ಜವಾಹರ್‌ಲಾಲ್ ನೆಹರು ಸೆಂಟರ್ ಫಾರ್ ಅಡ್ವಾನ್ಸ್‌ಡ್ ಸೈಂಟಿಫಿಕ್ ರೀಸರ್ಚ್, ಜಕ್ಕೂರು, ಬೆಂಗಳೂರು |
| 12 | ಜಗದ್ಗುರು ಶ್ರೀ ಶಿವರಾತ್ರೀಶ್ವರ ವಿಶ್ವವಿದ್ಯಾಲಯ, ಮೈಸೂರು. |
| 13 | ಇಂಟರ್‌ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಇನ್‌ಫರ್ಮೇಷನ್ ಟೆಕ್ನಾಲಜಿ, ಬೆಂಗಳೂರು |
| 14 | ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು |
| 15 | ಬಿ.ಎಲ್.ಡಿ.ಇ. ವಿಶ್ವವಿದ್ಯಾಲಯ, ವಿಜಯಪುರ |